# 123

# ನವ ಕೈಲಾಸ

(ಯಕ್ಷಗಾನ)

ರಚಯಿತರು:

ಶ್ರೀ| ಮಾಳಕೋಡ ನಾರಾಯಣ,

ಕಾಸರಕೋಡ (ಉತ್ತರ ಕನ್ನಡಾ ಜಿಲ್ಲೆ).

1957.




ಒಂದಾಣೆ ಮಾಲೆ

'ಒಂದಾಣೆ ಮಾಲೆ' ಪುಸ್ತಕಗಳು ಪ್ರತಿ ಶನಿವಾರ ಹೊರಡುತ್ತವೆ. ಒಂದೊಂದು ವಾರ ಒಂದೊಂದು ಹೊಸ ಪುಸ್ತಕ. ಪ್ರತಿಯೊಂದಕ್ಕೆ ಒಂದಾಣೆ. ಈ ಮಾಲೆಯಲ್ಲಿ, 1957ನೇ ಫೆಬ್ರವರಿ ಒಂದನೇ ವಾರದ ವರೆಗೆ 123 ಪುಸ್ತಕಗಳು ಹೊರಟಿವೆ.

ಏಜಂಟರಿಲ್ಲದ ಕಡೆಗಳ ಪುಸ್ತಕ ವ್ಯಾಪಾರಿಗಳು ಏಜನ್ಸಿಗಾಗಿ ಬರೆಕೊಳ್ಳಿರಿ

# ಒಂದಾಣೆ ಮಾಲೆಯ ಪುಸ್ತಕಗಳು ಟಪ್ಪಾಲು ಮೂಲಕ ಬೇಕಾದವರಿಗೆ

ಒಂದಾಣೆ ಮಾಲೆಯ ಪುಸ್ತಕಗಳನ್ನು ಆಯಾಯ ಸ್ಥಳದ ಏಜಂಟರಿಂದಲೇ ಪಡಕೊಳ್ಳುವುದು ಒಳ್ಳೇದು. ಇದರಿಂದ ಟಪ್ಪಾಲು ಖರ್ಚು ಉಳಿಯುವುದು.

ಏಜಂಟರು ಇಲ್ಲದ ಕಡೆಗಳಲ್ಲಿ, ಟಪ್ಪಾಲು ಮೂಲಕ ಅಪೇಕ್ಷಿಸುವವರು, ಬೇಕಾದ ಪುಸ್ತಕಗಳ ಕ್ರಯವನ್ನೂ, ಟಪ್ಪಾಲು ಖರ್ಚನ್ನೂ ಮುಂಗಡವಾಗಿ ಕಳುಹಿಸಬೇಕು. ಪ್ರತಿ ಪುಸ್ತಕದ ಬೆಲೆ ಒಂದಾಣೆ. ಸಾಧಾರಣ ಪ್ರತೀ ಮೂರು ಪುಸ್ತಕಗಳಿಗೆ ಟಪ್ಪಾಲು ಖರ್ಚು ಒಂದಾಣೆ. ಈ ಪ್ರಕಾರ ಕಳುಹಿಸಬೇಕು.

ಒಂದು ವರ್ಷದ 52 ಪುಸ್ತಕಗಳು ಬೇಕಾದವರು, ರೂ. 4–8–0 ಮುಂಗಡವಾಗಿ ಕಳುಹಿಸಿದರೆ, ಆಗಲೇ ಪ್ರಕಟವಾಗಿದ್ದ ಪುಸ್ತಕಗಳನ್ನು ಹಣ ತಲಪಿದ ಕೂಡಲೆ ಕಳುಹಿಸುವುದಲ್ಲದೆ, ಆ ಮೇಲೆ ಒಮ್ಮೆಗೆ ಪ್ರತೀ ಮೂರು ಅಥವಾ ನಾಲ್ಕು ಪುಸ್ತಕಗಳಂತೆ ಅವುಗಳು ಪ್ರಕಟವಾದ ಹಾಗೆ, ಒಟ್ಟು 52 ಪುಸ್ತಕಗಳಾಗುವ ವರೆಗೆ ಟಪ್ಪಾಲಿನಲ್ಲಿ ಕಳುಹಿಸಲಾಗುವುದು.

ವಿ. ಪಿ. ಕಳುಹಿಸಲಾಗುವುದಿಲ್ಲ.

**ಒಂದಾಣೆ ಮಾಲೆ,**

**ಪ್ರಭಾತ ಆಫೀಸು :: ರಥಬೀದಿ :: ಮಂಗಳೂರು-೧.**

# ನವ ಕೈಲಾಸ

## (ಯಕ್ಷಗಾನ)

---

### ಪಾತ್ರಗಳು

| | | |
|---|---|---|
| ಈಶ್ವರ. | ವಿಷ್ಣು. | ದೇವೇಂದ್ರ. |
| ಪಾರ್ವತಿ. | ಮಧು. | ಕೈಟಭ. |
| ಬ್ರಹ್ಮ. | ವಸಿಷ್ಠ. | ಚಾರಕರು—ಇತ್ಯಾದಿ. |

॥ ರಾಗ: ಭೈರವಿ. ಝಂಪೆ ತಾಳ ॥

ಭಜಿಸುವೆನು ನಾನಿನ್ನ । ಗಜವದನ ಸಲಹೆನ್ನ । ಗುಂಜಾವನಾಧೀಶ । ಮಾಂ ಪಾಹಿ ಪಾಹೀ ॥ ೧ ॥ ಹೇರಂಭ ಶಂಭುಸುತ । ಸರ್ವಾಲಂಕಾರ ಯುತ । ವಾರಮುಖ ನಾಗಮುಖ ಮಾಂ ಪಾಹಿ ಪಾಹೀ ॥ ೨ ॥ ಮಂಗಲಮಹಾಕಾಯ । ಭಾಗವತರ ಕಾಯ್ವ । ಶೃಂಗಾರ ಕವಿತಿಲಕ । ಮಾಂ ಪಾಹಿ ಪಾಹೀ ॥ ೩ ॥ ಮರೆಹೊಕ್ಕ ಶರಣರನು । ಕರುಣದಲಿ ನೋಡುತಿಹ । ದುರಿತವಿಘ್ನವಿನಾಶ । ಮಾಂ ಪಾಹಿ ಪಾಹೀ ॥ ೪ ॥

॥ ಭಾಮಿನಿ ॥

ಸರಸತಿಯ ಧ್ಯಾನಿಸುತ ಬಹುಪರಿ । ಕರೆದು ಹರಿಪಾದಾರವಿಂದಕೆ । ಎರಗಿ ಸಕಲಾಭೀಷ್ಟ ಕರುಣಿಸಲೆಂದು ಬೇಡುವೆನು ॥ ಕರದಿ ಕಮಲವ ಪಿಡಿದು ಬೀಣೆಯ । ಭರದಿ ಬಾರಿಸಿ ನಿರತ ಪೊಗಳುವೆ । ಪರಮ ಹರುಷದಿ ಬಂದು ಪಾಲಿಸಲೆನ್ನ ಪ್ರೇಮದಲಿ ॥ ೧ ॥

॥ ದ್ವಿಪದಿ ॥

ಕುಲದೇವರನು ನೆನೆದು ಭಕುತಿಪರನಾಗಿ । ಬಲವೆನಿಸಿ ಮೆರೆದ ಕವಿ ನಿಪುಣರಿಗೆ ಬಾಗಿ ॥ ೧ ॥ ಕೈಲಾಸಪತಿಯೆನಿಸಿ ಉಗಿದ ಸರ್ವೇಶ । ಭೂಲೋಕದಲಿ ನಿಂದು ಮೆರೆದ ಮಧುಕೇಶ ॥ ೨ ॥ ಪತಿಗೆ ಅನುಕೂಲೆ ತಾ ಗಿರಿಜೆ ಗುಣಶೀಲೆ । ಸತಿ ಜಯಂತೀಪುರದಿ ನೆಲಸಿದಳು ಕೇಳೆ ॥ ೩ ॥

ಚರಿತೆಯನು ಯಕ್ಷಗಾನದಲಿಂದು ಒರೆದೆ । ವರ ಸಿದ್ಧಿನಾಯಕನ ಕೃಪೆ ಯಿಂದ ಬರೆದೆ ॥ ೪ ॥ ಸುಮತಿಗಳು ಇದನೆಲ್ಲ ತಿದ್ದಿ ವಾಚಿಪುದು । ಮಮತೆ ಯಿಂದಲಿ ಹರಸಿ ಇರವ ಬಯಸುವದು ॥ ೫ ॥

॥ ರಾಗ: ಸೌರಾಷ್ಟ್ರ. ತ್ರಿವುಡೆ ತಾಳ ॥

ತೋಷದಿಂದಾ ಸೂತಮುನಿ ಮಿತ । ಭಾಷೆಯಿಂದಲಿ ಕುಳಿತು ಕೇಳುವ । ವೇಷಭೂಷಿತ ಋಷಿಗಳಿಗೆ ಹಿತ । ಭಾಷೆಯಿಂದ ॥ ೧ ॥ ಸತ್ಯ ಧರ್ಮವು ಭಕ್ತಿ ತಪಸಿಗ । ಗತ್ಯವೆಂಬುದ ಕತೆಯ ರೂಪದಿ । ನಿತ್ಯರುಹಿ ಶಿವಭಕ್ತೆ ಜಗಕ । ಗತ್ಯವೆಂದ ॥ ೨ ॥ ಸೂತಮಹಮುನಿವರನೆ ಲಾಲಿಸು । ಖ್ಯಾತ ಕೈಲಾಸಾಧಿಪತಿ ಜ । ಯಂತಿ ಕ್ಷೇತ್ರಕೆ ಬಂದು ನೆಲಸಿಹ । ರೀತಿ ಯನ್ನು ॥ ೩ ॥ ರಾಕ್ಷಸರು ಮಧುಕೈಟಭರು ಬಲ । ಮೋಕ್ಷದಾಯಕ ಹರಿಯು ಅಡಗಿಸಿ । ಸೂಕ್ಷ್ಮ ಬುದ್ಧಿಲಿ ಕೊಂದ ವಿಷಯವ । ಪೇಕ್ಷಿಸುವೆವು ॥ ೪ ॥ ಪತಿಯ ವಿರಹವ ಸಹಿಸಲಾರದೆ । ಸತಿಯು ಪಾರ್ವತಿದೇವಿ ಈಶನ । ನುತಿಸಿ ಕೂಡಿದ ಪರಿಯನೀಗಳೆ । ಯತಿವರೇಣ್ಯ ॥ ೫ ॥ ಅರುಹುವದು ನೀವೆಂದ ಮಾತನು । ಅರಿದು ದೇವನ ಮೊದಲು ಧ್ಯಾನಿಸಿ । ಕರಮುಗಿದು ಋಷಿವೃಂದಕರುಹಿದ । ಹರುಷದಿಂದ ॥ ೬ ॥

॥ ವಾರ್ಧಿಕ ॥

ಒಂದುದಿನ ಕೈಲಾಸಗಿರಿಯಲ್ಲಿ ಶಂಕರನು । ಚಂದದಿಂ ಒಡ್ಡೋಲಗದಿ ಕುಳಿತು ರಂಜಿಸಿರೆ । ವಂದಾಗಿ ನಾರಿಯರು ನರ್ತಿಸುತ ತರತರದ ಗಾನವನು ಪಾಡುತಿರಲು ॥ ಮುಂದರಿದು ಕುವಲೆಯರ ಇಂಚರದಿ ಹೊರಟ ಆ ನಾದವನು ಮೆರೆದು ದೇವತೆಗಳೋಲೈಸುತಿರೆ । ನಂದದಲಿ ನಾರದಾದಿಗಳು ಶಿವನೋಲಗವ ಪೊಗಳಿಲ್ಲ ಪೊರಡುತಿರಲು ॥ ೧ ॥

॥ ರಾಗ: ಕಾಂಬೋದಿ. ಝಂಪೆ ತಾಳ ॥

ಇತ್ತ ಈಶನು ಬಲಸಂ । ಪತ್ತಿನಿಂದಿರುವ ಸತಿ । ಮುತ್ತು ಸುರಿಯುವ ವಾಣಿ । ಎತ್ತ ಪೋಗಿಹಳೊ ॥ ಕತ್ತುರಿಯ ಕಂಪಿಡಿದು । ಕೂತಲ್ಲೆ ನಿರುಕಿಸುತ । ಸುತ್ತುವರಿಯದೆಯೆ ಬೇ । ಸತ್ತ ತನ್ನೊಳಗೆ ॥ ೧ ॥ ಇಂದಿನೀ ವೈಭವವ । ಸುಂದರಾಂಗಿಯ ಕೂಡಿ । ಚಂದದಿಂದಲಿ ಕಾಂಬ । ಸಂದರ್ಭ ಕಳೆಯೆ ॥ ಅಂದದಿಂದಲಿ ನಲಿವ । ಮಂದಗಾಮಿನಿ ವಿನಯ । ವಾದ ಕೋಗಿಲೆ ಕಂಠ । ದಂದದಿಂಪಿಲ್ಲ ॥ ೨ ॥

॥ ಭಾಮಿನಿ ॥

ಕಂದುಕಂಧರ ದಿನವು ತನ್ನ ನಿ । ರ್ಬಂಧದಲಿ ಇರುತಿರುವ ಗಿರಿಜೆಗೆ । ಇಂದು ಏನಾಗಿಹುದು ಸಂಧ್ಯಾಕಾಲ ಕಾದಿಹುದು ॥ ಇಂದುಧರನೆಂತೆಂದು ತನ್ನೊಳು । ಚಂದ್ರಿಕೆಯು ಸೂಕ್ಷ್ಮನ ತರಂಗವ । ತಂದುಹಾಡುವೆನೆಂದ ವಿಹ್ವಲನಾಗಿ ಮನದೊಳಗೆ ॥ ೧ ॥

॥ ರಾಗ: ಮೋಹನ. ಏಕತಾಳ ॥

ಬಂದಳಾಗ ಗೌರಿಯು ಆ । ನಂದದಿ ಚೆನ್ನ । ಚೆಂದದಿ । ಗತಿ । ಮಂದದಿ । ಮುದ । ಹೊಂದಿದ । ಕಮಲಿನಿಯಂದದಿ । ಬಂದಳಾಗ ॥ ಪ ॥ ಮಂದಗಮನೆ ನಯನೆ ಹರನ । ನೆನೆಯುತ್ತ । ಯಶವ ಕೋರುತ್ತ । ಗೆಜ್ಜೆಗುಲುಕುತ್ತ । ಸೊಬಗ ಬೀರುತ್ತ । ಶಿಖರಕೇರುತ್ತ । ಬಂದಳಾಗ ॥ ೧ ॥ ಇಂಪು ಏನಿದು ಸೊಂಪು ಒನಪು । ಮನಸೋಸಿ । ಗಾಳಿಬೀಸಿ । ಬಿಗುವ ಕಲಕಿಸಿ । ನೆರಳಿನೆರಚಿಸಿ । ಘಗುವ ಮೂಡಿಸಿ । ಬಂದಳಾಗ ॥ ೨ ॥ ತುಂಬುಗುರುಳ ತರಳೆ ಸರಳೆ । ನಡುಬಳುಕಿ । ಸಾರುತಳುಕಿ । ಸೆರೆಮರೆ ಪಿಲುಕಿ । ನಮಿಸಿ ಕೈಕುಲುಕಿ । ಹರನ ವ್ಯೆ ತಳುಕಿ । ಬಂದಳಾಗ ॥ ೩ ॥

॥ ಭಾಮಿನಿ ॥

ನಟನು ಹರಸಿದ ಕಂಡು ಇನಿಯಳ । ನಟಿಸಿ ಪೆಗಲೊಳು ಇಟ್ಟು ಕರವನು । ಧಿಟ್ಟನಾಗಿಯೆ ನೂಕಿ ಮೋರೆಯ ತಿರುವಿದನು ಕಡೆಗೆ ॥ ಘಟಿಸ ಲಾರದ ಪರಿಯ ನೋಡುತ । ಎಟಕಲಾರದ ನೆವವ ನೆನೆಸುತ । ದಿಟವ ನರಿಯಲು ಪತಿಯ ಮುಗವನು ನಿರುಕಿಸಿದಳಾಕೆ ॥ ೧ ॥

॥ ಏಕತಾಳ ॥

ಬೇಡುವೆನು ನೀ ಎನ್ನೊಳೋಲಾಡು । ಮುನಿಸನ್ನ ಬದಿಗಿಡು । ಬೇಡುವೆನು ನೀ ಎನ್ನೊಳೋಲಾಡು ॥ ಪ ॥ ನಮಿಪೆನಾ ಗುಣ । ಧಾಮ ದಿನದಿನ । ಕಾಮಿತಾರ್ಥವನು । ಘನ । ಪ್ರೇಮದಿಂದಲೆ । ನೇಮದಿಂದಲಿ । ಪ್ರೇರಿಸಿ । ಪೂರೈಸಿ । ಹಾರಿ ನೀ ಕುಣಿದು ಬಾ ॥ ೧ ॥ ಸೆಳೆದು ನೀಮನ । ಹೊಳೆದು ಹೊಳೆದು । ಬಾಳು ಸುಖವಾಗೆ । ಹಸು । ಬಾಲಳಳು ಎ । ಶಾಲ ಮನದಿ । ಆಲೈಸಿ । ಓಲೈಸಿ । ಕಾಲ ನೀ ನಲಿದುಬಾ ॥೨॥ ತಾರೆ ತನುವು । ಹಾರ ಮಾಡಿಹೆ । ಹರನೆ ನಿನಗಾಗಿ । ಅತಿ । ತೂರಿಕನಲ । ಹಾರ್ದ ನೀತಿ । ಹಾರುತ್ತ । ಬಾರಿತ್ತ । ಸಾರಿ ಪೇಳುವೆನಿದೊ ॥ ೩ ॥

|| ಕಂದ ||

ನಲ್ಲನ ಒಲುಮೆಯ ಕೋರ್ದು | ತಲ್ಲಣಿಸುವ ಗಿರಿಜೆಯ ಗಿರಿಧರನವ ಕಾಣಲ್ || ಬಲ್ಲೆನು ನಿನ್ನ ವಿಕಲ್ಪವ | ನೆಲ್ಲವ ತಾನೆನುತ ಮುಗುಳುನಗು ತಿಂತೆಂದಂ || ೧ ||

|| ರಾಗ: ಮಾರವಿ. ಏಕತಾಳ ||

ಕಾಮಸುಂದರ ಸುಮ | ಕೋಮಲಾಂಗಿ ಪ್ರಿಯೆ | ಭಾಮೆಯೆ ಪಾರ್ವತಿಯೆ || ಸಮಯ ಪೂಜೆ ಆ | ಗಮನವಾಯ್ತು ಸರಿ | ಮಮತೆಯ ಅರಗಿಣಿಯೆ || ೧ ||

|| ರಾಗ: ತೋಡಿ. ಆದಿತಾಳ ||

ಎನ್ನ ರಮಣ ದುರಿತಹರಣ | ಚೆನ್ನ ಹರಿಯೆ ಸಮಯವರಿತು | ಮುನ್ನ ಸಕಲ ಸಿದ್ಧಗೊಳಿಸಿ | ಮನದಿ ನಿನ್ನನಿರಿಸಿ ಬಂದೆ || ೧ ||

|| ರಾಗ: ಮಾರವಿ. ಏಕತಾಳ ||

ಹರಿಣಿ ನಿನ್ನಯ ಗುಣ | ವರಿತೆ ಮಂಗಳೆ ನಿಜ | ವರಿಯದ ಯೋಚನೆಯ || ಕೆರೆಯೊಳು ಸಿಲುಕಿ ನೀ | ಹೊರಳಿ ನೋಡದೆ ಹೊರ | ಧರೆಯನು ಮರೆತಿಹೆಯ || ೧ || ಏನಾಗಿದೆ ನಿನ | ಗೇನನುಮಾನವು | ಏನಿದೆ ಮನದೊಳಗೆ || ಮೇನಕೆಯರ ಗಾ | ಯನ ಕೇಳಲು ಇಲ್ಲ | ಏನು ಎಲ್ಲಿ ಗಮನ? || ೨ ||

|| ರಾಗ: ತೋಡಿ. ಆದಿತಾಳ ||

ಇಲ್ಲಿ ಬೆಟ್ಟವಿಳಿದು ಬಂದೆ | ಗೋಲವಾದ ವಸ;ಥೆ ಮುಂದೆ | ಹಾಲಿ ಹಂಥ ಕನಸು ರಮಣ | ಬಲಿವ ಮುನಿಸು ಬೇಡ ಕರುಣ || ೧ ||

|| ರಾಗ: ಮಾರವಿ. ಏಕತಾಳ ||

ಯಾವ ಕನಸು ನೀ | ನಾವ ಪರಿಯ ಸಲೆ | ಕಾವ ದಾರಿ ಕಂಡೆ || ಯಾವ ವಿಚಿತ್ರ ವಿ | ದಾವ ಸೊಬಗು ಸರಿ | ಯಾವ ಬೆಡಗು ಪೇಳೆ || ೧ ||

|| ರಾಗ: ತೋಡಿ. ಆದಿತಾಳ ||

ಕನಸು ನೆನಸು ಯಾವುದಿಲ್ಲ | ಚೆನ್ನ ಮರ್ತ್ಯಲೋಕ ಕಂಡು | ನೆನಸಿ ವಸತಿಮಾಡಿ ಕೆಲವು | ದಿನವ ನೂಕಬೇಕು ಮನಸು || ೧ ||

॥ ರಾಗ: ಮಾರವಿ. ಏಕ-ತಾಳ ॥

ಪನ್ನೀರು ಸುಮನಗಿರಿ । ವನದ ಸೊಬಗಿಗೆಣೆ । ಕಾಣೆವಿಕೆ ಭೂಮಾ ॥
ಏನು ಕೊರತೆ ನಿನ । ಗೇನು ಕಡಿಮೆ ಇದೆ । ಗೊಣಗುವಲಸೆ ಕೈಲಸ ॥ ೧ ॥

॥ ರಾಗ: ಮಾರವಿ. ಏಕ-ತಾಳ ॥

ಅಹಾ ನಿನ್ನ ತಲೆ । ಗಹಾ ಮೆಚ್ಚುವೆನು । ಬಹಳ ಪಾಪಪುಣ್ಯ ॥
ಸಹಜವಿರಲಿ ತುಸು । ಗಹನ ತಿಳಿದೆ ತಡೆ । ಸಹನೆ ಇರಲಿ ರನ್ನ ॥ ೧ ॥
ಇರಲು ಕಾಲ ಸರಿ । ಬರಲಿ ಧರೆಗೆ ಕರೆ । ತೆರಳಿ ಪೋಪ ಬೇಗ ।
ಅರಹಿ ನೇಮದಾ । ಅರಿವು ಬಂದು ನುಡಿ । ಗ್ಹೊರಳಿ ನಡೆದರಾಗ ॥ ೨ ॥

॥ ವಾರ್ಧಿಕ ॥

ಪ್ರಳಯ ಕಾಲದೊಳೊಮ್ಮೆ ಜಲದಿ ಭೂ ಮುಳುಗಿರಲು । ಪ್ರಳಯಕಾರಕ ಹರಿಯು ಕಾಣುತಿರುವೊಂದಾಲ । ದೆಲೆಯಮೇಲ್ಮಲಂಗಿ ನೊರೆಗೆಸೆದು ನಿದ್ರೆ ಪರವಶನಾಗಿ ತೇಲುತಿರಲು ॥ ಅಲೆಯುತಿಹ ತೆರೆಯೊ ಳೋಲಾಡುತಿಹ ಗುಣಧಾಮು । ನೊಲಪಕಿವಿಗಳಲ್ಲಿ ಉದ್ಭವಿಸಿರುವ ಕಲ್ಮಷದಿ । ಬಳೆದುಪುಟ್ಟಿದ ಮಧೂಕೈಟಭರು ಇತ್ತ ಧರೆಯೊಳಗುರಿದು ಮೆರೆದಿದ್ದರು ॥ ೧ ॥

॥ ಕಂದ ॥

ನಕ್ಕರು ಖ ಷಿಯಜ್ಞವಕಂ । ಡ್ಹೊಕ್ಕೆಲ್ಲರ ಬಡಿದು ಪಾಳುಗೈಯುತ ಭರದಿಂ ॥ ಸಿಕ್ಕಿದ ರಾಜರನೆಲ್ಲಂ । ದಿಕ್ಕೆಣಿಸಲ್ಹೋಡಿಸಿ ವಿಜಯ ದುಬ್ಬರದಿಂದಂ ॥ ೧ ॥

॥ ರಾಗ: ಕಲ್ಯಾಣಿ, ಅಷ್ಟ ತಾಳ ॥

ಘನವಾದ ಪದವಿಯೆಲ್ಲಾ । ನಮಗೀಗ ದೊರೆತರು । ಮನದಾಶೆ ಅಳಿಯದಲ್ಲಾ ॥ ಪ ॥ ಜನರೆಲ್ಲಾ ಹಿತಬಯಸಿ । ನೆನೆದು ಕೈಜೋಡಿಸಿ । ವಿನಯದೋಳ್ಕರೆವರು । ದಿನವು ಪ್ರಭೋ ಎಂದು ॥ ೧ ॥ ಬಿಣಪು ಕೋಮಲೆಯರೆಲ್ಲ । ಗೆಜ್ಜೆಯ ಕಟ್ಟಿ । ಝಣ ಝಣರೆಂದು ಪಲ್ಲ । ಕುಣಿದು ಹಾಡುತ ಮನ । ತಣಿವ ನೋಟದಿ ನೋಡಿ । ಮಣಿದು ಬೇಡುತಲಿಹರು । ಗುಣನಿಧಿ ರಕ್ಷಿಸೆಂದು ॥ ೨ ॥ ಪೊಡವಿಯೊಳಿರುವ ಎಲ್ಲ । ವಸ್ತುವು ನಮ್ಮ । ಒಡೆತನಕಿದಿರು ಇಲ್ಲ । ಬಿಡದೆ ನಮ್ಮಾಜ್ಞೆಯ ।

ಹಿಡಿದು ಧೀರರು ಭಯ | ಪಡೆದು ಮುಂದಡಿಯಿಡ | ಲೊಡೆಯನೆ ಕಾಯುತಿಹರು || ೩ ||

|| ರಾಗ: ಸುರಟಿ. ಏಕತಾಳ ||

ಇಲ್ಲೇನಿದೆಯೆನುತ | ಅಸುರರು | ಚೆಲ್ಲಾನೆ ನಗುನಗುತ || ಭಲೆ ಭಲೆ ಸಿಕ್ಕರು ಸದೆಬಡಿದಿಕ್ಕಲು | ಬಲಶಾಲಿಗಳಂತಿಹ ಸುರಕುರಿಗಳು || ೧ || ಅಮರಾವತಿ ಇಹುದು | ಸುಂದರ ರಮಣಿಯರಿರಬಹುದು | ಸುಮನಸರನು ಸುರಪತಿಯನು ಓಡಿಸಿ | ಅಮರರಾಗಿ ಸುಹರ್ಷದೊಳಿರಬಹುದು || ೨ || ಸುಮ್ಮನೆ ಕುಳಿತಿರುವ | ನಮ್ಮಯ | ಬಿಮ್ಮು ಅರಿಯದಿರುವ | ತಮ್ಮೊಳಿ ಎಲ್ಲವು ಅಡಗಿಹುದೆನ್ನುವ | ಬೊಮ್ಮನೆ ಮೊದಲಾದವರಸು ಮುಕ್ಕುವ || ೩ ||

|| ರಾಗ: ಕಾಂಬೋದಿ. ಝುಂಪೆ ತಾಳ ||

ಎನುತ ಕೈ ಕುಣಿಸಿ ಮಾರ್ಮಲೆದು ಕುಳಿತಲ್ಲಿ ನೆಲಕುಟ್ಟಿ ಹುಡಿಗೈದರಾಗ || ದಿನವು ಮಾಗಧರಂತೆ ಪೊಗಳಿ ಸ್ತುತಿಗೈಯುತಿಹ ಸಚಿವರನು ಕರೆದು ಬೇಗ || ೧ || ತಮ್ಮೊಳಗೆ ಯೋಚಿಸಿರುವೆಲ್ಲ ಸಂಗತಿಯರುಹಿ ಸೈನ್ಯವನು ನೀವು ಈಗ || ಒಮ್ಮಳಿಸಿರೆಂದೆಂದು ಸಕಲ ಸನ್ನಹದೊಡನೆ ದಿಗ್ವಿಜಯಕ್ಹೊರಟರಾಗ || ೨ || ದೇವಲೋಕವನೇರಿ ಬೇಗಿ ಜಿಂಕವ ಬೇರಿ ಸೂರೆಗೈದರು ವನವನು || ದೇವನೆಲ್ಲಿರುವನವ ಪೋಗಿ ಹೇಳಿರಿ ಸಾವ ಬೇಡಿಕೊಳ್ಳಲಿ ಇರವನು || ೩ ||

|| ಭಾಮಿನಿ ||

ಕಾವಲಿಹ ವನಪಾಲಕರ ಬರಿ | ಹಾವಿನಂದದಿ ಬಡಿದು ಬೊಗಳಲು | ನೇವರಿಸಿ ಕೊಳುತೆದ್ದು ಗಡಗಡ ನಡುಗಿ ಸುರಸಭೆಗೆ || ನೋವು ತಾಳೆವು ಬಂದು ಕೂಗುತ | ಸಾವೆವೆಂದೊರಲುತ್ತ ಇಂದ್ರನ | ಓವರಿಸು ನೀ ಕಾವದೊರೆ ಎಂದಂದು ಪದಕೆರಗೆ || ೧ ||

|| ಕಂದ ||

ಕರದೊಳು ಸನ್ನೆಯಮಾಡುವ | ಮರಗುವ ಕಣ್ಣೀರನಿಸುವ ನೆಲ ಸಾರಿರುವಾ || ನರಳುವ ಅನುಚರರನು ಕಂ | ಡೊರೆದನು ಸುರಪತಿ ಯುರಿಮುರಿದಬ್ಬರದಿಂದಂ || ೧ ||

॥ ರಾಗ: ಸುರಟಿ, ಏಕತಾಳ ॥

ಏನಾಯಿತು ಹೇಳಿ । ವೀರಸ । ಮಾನರಿ ಎದ್ದೇಳಿ ॥ ಏನಿದು ಗಾಯ ವಗಾಯವುಮಾಗಲಿ । ಏನಿದು ಸೋರುವ ರಕ್ತದ ಕಾರಣ ॥ ೧ ॥ ಹುಲಿ ಕರಡಿಗಳೇನು । ನಿಮ್ಮಯ । ಕೊಲೆಮಾಡಿದವೇನು ॥ ಬಲಶಾಲಿ ಗಳಾರಾದರು ಬಂದರೆ । ಹಲುಬಿರಿ ನಿಮಗವರಿಂದಲೆ ತೊಂದರೆ ॥ ೨ ॥ ತಡಮಾಡದೆ ಬೇಗ । ಉಸುರಿರಿ । ಪುಡಿಮಾಡುವೆನೀಗ ॥ ಗುಡುಗುವ ಮಾತಿಗೆ ಧೈರ್ಯದಿ ನಿಂದರು । ಒಡೆಯಗೆ ಬಾಗುತ ಚೇತರಿಸೆಂದರು ॥ ೩ ॥

॥ ಲಾವಣಿ, ಏಕತಾಳ ॥

ತಾಳಲಾರೆವು ಉರಿಯ । ಮೇಳ ಬಂದಿದೆ ಅರಿಯ । ಹೇಳಲಾರೆವು ವನವನು । ತುಳಿದು ಹಾಸೂರೆ ಗೈದಿಹಪರಿಯನು ॥ ೧ ॥ ಕೆಳ ಲೋಕ ದವರಂತೆ । ಕಾಲು ಹಿಡಿಬೇಕಂತೆ । ಬಲವಾಗಿ ಹೊಡೆದೆಂದರು । ನಿಲದೆ ನಿಮ್ಮೊಡನೆ ಹೋಗ್ದೇಳೆಂದರು ॥ ೨ ॥

॥ ರಾಗ: ಸೌರಾಷ್ಟ್ರ, ತ್ರಿವುಡೆ ತಾಳ ॥

ಎಂಬ ಚಾರರ ನುಡಿಯನಾಲಿಸಿ । ದೊಂಬಿಗಳ ಉರಿಗಣ್ಣರೇಳಿಸೆ । ಕೊಂಬೆ ನರಿಗಳ ಜೀವನೀಗಳೆ । ನಂಬಿ ಎಂದು ॥ ೧ ॥ ಅಖಿಲ ಸೈನಿಕ ರನ್ನು ಬರಯಿಸೆ । ನಖಶಿಖಾಂತರವನ್ನು ನಿರುಕಿಸಿ । ಸಕಲ ಸಿದ್ಧತೆಯಿಂದ ಯುದ್ಧಕೆ । ನೂಕಬೇಕೈ ॥ ೨ ॥ ಅರುಹಿ ಹೇಳಿದ ಮಲ್ಲ ವೀರರ । ಜರಿದು ಕೆಂಗಡಿಕಾರಿ ಹುರುಪಿಸಿ । ಏರಿ ರಥವನು ಕಟ್ಟಿ ಕುದುರೆಯ । ತೂರಿ ಮುಂದೆ ॥ ೩ ॥

॥ ರಾಗ: ಮಾಯಾಮಾಳವ ಗೌಳ—ಏಕತಾಳ ॥

ಮಾಮರ ಕೆಡಹಿದ ಭೀಮರ ಕಾಣುತ । ರೋಮಾಂಚನವಾಗಿ ॥ ಭೂಮಿಯೆ ಬಾಯ್ಬಿಡುವಂದದಿ ಇಂದ್ರನು । ಧುಮುಕೆಂದನು ಕೂಗಿ ॥ ೧ ॥ ಏನಿದನಾಹುತ ಏನವ್ಯಾಹತ । ಶುನಕರೆ ನಿಜವರುಹಿ ॥ ವಿನಯದಿ ಕ್ಷಮಿಸೆ ನ್ನುತ ಹೆಸರ್ಪೇಳಿ । ಮೌನದಿ ಹಿಂದಿರುಹಿ ॥ ೨ ॥ ಸಾವನೆ ಬಯಸಿ ಬಂದುದೆ ಆದರೆ ! ನಾವ್ ಮಧು ಕೈಟಭರು ॥ ಜೀವವು ಬೇಕಾದರೆ ನೀ ಬೇಡಿಕೊ । ಕಾಣೆವು ಮೊದಲುಸುರು ॥ ೩ ॥ ಪೊಕ್ಕು ಬೆದರಿಕೆಯ ಹಾರಿಸಬೇಡಿರಿ । ಸೊಕ್ಕನು ಮುರಿವೆನಿದೊ ॥ ಸಿಕ್ಕಿದ ಶರವನು ಕೀಲಿಸಿ

ಹೊಡೆದನು । ರಕ್ಕಸಂಗೆ ಭರದಿ ॥ ೪ ॥ ತಡೆಯಿಕೊ ದುರುಳನೆ ಕಡೆಗಾಲವು ನೀ । ಹುಡುಕಿಕೊ ಸರಿತಾಣ ॥ ಕೂಡಲೆ ಶರವನು ಕಡಿದುರುಳಿಸಿ ಮರು । ಹೊಡಿದರ್ ಪ್ರತಿ ಬಾಣ ॥ ೫ ॥

॥ ಕಂದ ॥

ಅರಿಗಳ ಶರಘಾತದ ಉರಿ । ಸೈರಿಸಲಾರದೆ ಹಳಂ ಕಿ ಗೋಳಿಡಲಾಗಲ್ ॥ ಚೀರುವ ಸೇನೆಯ ಕಾಣುತ । ಬಿರಿದೋಡಲಸುರರು ಪರಿಹಾಸ್ಯಂಗೈದರ್ ॥ ೧ ॥

॥ ರಾಗ: ನಾರವಿ. ಏಕತಾಳ ॥

ಮಹಾಬಲಿ ಬಲಶಾಲಿಯು ಇವನೇ । ಸಹನರಿ ವೊಲವಿಕವು । ಮಹಾಸೇನೆಯನೆ ಓಟಿಗೆ ಗೆಲುವ । ಮಹಾಧೀರ ನಿಜವು ॥ ೧ ॥ ಎಲ್ಲಿಗ ಓಡುವೆ ನಿಲ್ಲಿಸು ರಥವನು । ಲಲನೆಯರಾ ಗಾನ ॥ ಇಲ್ಲಿಯೆ ಹಾಡಿಸಿ ಆರತಿ ಎತ್ತುವ । ಮಲ್ಲನ ಗುಣಗಾನ ॥ ೨ ॥

॥ ರಾಗ: ಪುನ್ನಾಗ. ಅಷ್ಟತಾಳ ॥

ಎದ್ದರು ಅರಮನೆಗೆ । ಒಡ್ಡಾಗಿಯೆ ಮುದದಿ । ಒಡ್ಡೋಲಗವೇರಿ । ಮೆದ್ದರು ಮನಪೋರಿ ॥ ೧ ॥ ಇಷ್ಟಾದರು ಮನದ । ಇಷ್ಟವು ಪೂರ್ತಿಸದು । ಧಿಟ್ಟನು ಇರುವವನ । ಹಿಟ್ಟನ ಬ್ರಹ್ಮನವ ॥ ೨ ॥ ಈಗಲೆ ಪೋಗಲ್ಲಿ । ಸೋಗಿನ ಕಮಲಜನ । ಕೂಗಿಸಿ ಓಡಿಸುವ । ಬೇಗೆಯ ಹತ್ತಿಸುವ ॥ ೩ ॥

॥ ಭಾಮಿನಿ ॥

ಬ್ರಹ್ಮರಂಧ್ರಕ್ಕೇರಿ ತಾಮಸ । ಬ್ರಹ್ಮಲೋಕವ ಸೇರಿಸಾರ್ದರು । ಬ್ರಹ್ಮಕಲ್ಪದ ಬ್ರಹ್ಮಚಾರಿಯೆ ಕೊನೆಯು ನಿನಗಿಂದು ॥ ಬ್ರಹ್ಮಾಂಡವೆ ನಡುಗೆ ಧುರದೊಳು । ಬ್ರಹ್ಮನನೆ ಕಂಗೆಡಿಸಿ ಓಡಿಸಿ । ಬ್ರಹ್ಮಾನಂದವ ತಾಳ್ದಿವೆನುತ ಮರಾವತಿಗೆ ಮರಳೆ ॥ ೧ ॥

॥ ರಾಗ: ಸಾಂಗತ್ಯ. ರೂಪಕತಾಳ ॥

ಸುರನಾಥ ಬ್ರಹ್ಮನನು ಕಾಣೆ ಪೋಗಲು ಅಲ್ಲಿ । ಬರಿದಾದುದಾಸನವು ಇರಲು । ಬರಲು ಮುಂದಕೆ ಪಾಳುಗೈದ ನಂದನವನವು । ಬರಿದಾಯ್ತು ಬಂದುದೆನುತ ॥ ೧ ॥ ಬಳಿಕ ದೂರದಿ ಸರಸಿಜೋದ್ಭವನ ಕಾಣುತ್ತ । ಎಲ್ಲಿಗೆ ನೀಪೋಪುದೆನಲು ॥ ಮೆಲ್ಲ ಮೆಲ್ಲನೆ ಕರೆದು ಅಜನು ಎಲ್ಲವನೊರೆದು । ತಲ್ಲಣಿಸಿ ಮುಂಗಾಣದೆಂದ ॥ ೨ ॥ ಬರದಿನ್ನು ಅಸುರರೊಳುಧುರವ್ಯಸಗು

ವುದು ವ್ಯರ್ಥ | ಅರ್ಥವಿಲ್ಲೆಂದನಿಂದ್ರ || ಹರಿಯೊಬ್ಬ ಸರಿ ಇದಕೆ ಎಂದು ವೈಕುಂಠಕ್ಕೆ | ಪೊರಟರಾಗಲೆ ಸಾಗುತ || ೩ ||

|| ಕಂದ ||

ಮುರಹರನನು ಸ್ತುತಿಸೈದು | ಕರಮುಗಿದು ಪೊರೆಯೆಂದೊರೆವ ಬ್ರಹ್ಮಾದಿಗಳಂ || ಹರಿಯೇನಿದೆಂದು ಕೇಳಲು | ಅರಿಯದ ವಿಷಯವಿಹುದೆ ನಿನಗೆಂದುಸಿರೆಂದರ್ || ೧ ||

|| ರಾಗ: ನೀಲಾಂಬರಿ, ರೂಪಕ ತಾಳ ||

ಏನನು ಹೇಳಲಿ ಉಳಿಯೆ | ಕಾಣೆವು ದಾರಿಯ ಸರಿಯೆ | ನಿನ್ನಯ ಮಹಿಮೆಯ ಪರಿಯೆ | ಮಾನನಿಧಿಯೆ ಹರಿಯೆ || ೧ || ನಿನ್ನಯ ಕರ್ಣದ ಮಲದಿಂ | ಜನಿಸಿದ ಮಧುಕೈಟಭರು | ಮಾನವ ಕಳೆದಶು ಸುರರು | ಹಾನಿಯ ಪೊಂದಿಹರು || ೨ || ಕಾದಿದೆ ಕತ್ತಲೆ ದಿಶೆಯು | ವ್ಯಾಧಿಯು ನಮ್ಮಯ ವಶವು | ಗಾದಿಯವರ ಕೈವಶವು | ವೇದಿಸಿಯಾ ಒಡೆಯಾ ||೩|| ಅಡಗಲು ನಾಡೇ ಇಲ್ಲವು | ಬಡಕಲು ಅಲೆಯುವ ದೇಹವು | ಕ್ರೋಧದಿ ಅಸುರರ ತರಿದು | ಬಾಧೆಯ ತಣಿಸುರಿದು || ೪ || ಭಾಸುರ ಪರಿಪರಿ ಯಾಚಿಸಿ | ಉಸುರಿದ ನುಡಿಯನು ಲಾಲಿಸಿ | ಗಾಸಿಹ ಭಯವನು ಹಾರಿಸೆ | ಮಾಸಿದ ನಗೆ ಸೂಸಿ || ೫ || ಕಸುವಿನ ಸೊಕ್ಕಿನ ರಕ್ಕಸ | ರಸುವನು ಪರಿಸಂಹರಿಸೆ | ಬೀಸುವೆ ಸುಖ ಸಮೀರವ | ರೋಸನು ಹರಿಸೂಸಿ || ೬ ||

|| ಭಾಮಿನಿ ||

ಧೈರ್ಯವನು ತುಂಬವರ ಕಳುಹಿಸಿ | ದುರ್ಗಿನವಶಕ್ತಿಯನು ಆಚರಿಸಿ | ಕಾರ್ಯಭಾರವ ಪೊತ್ತುಬಂದನು ಇಂದ್ರಪುರಿಗೆನುತ || ಧುರಕೆ ಬಂದಿಹೆನೆಂದು ಸಾರುವ | ಕರೆವ ಧೀರನ ಕಂಡು ಅಸುರರು | ಭೀರು ಏತಕೆ ಬಂದೆ ಪೆಸರನು ಪೇಳಪೋಗೆನಲು || ೧ ||

|| ರಾಗ: ಸೌರಾಷ್ಟ್ರ, ತ್ರಿವುಡೆ ತಾಳ ||

ಪೆಸರು ಸಾವಿರವಿಹುದು ಸುಲಭದಿ | ಉಸುರೆ ಹರಿಯೆಂದಹುದು ಬೀರರೆ | ಬೆಸಸಿ ನಿಮ್ಮಯ ಪೋಗುಯೆನ್ನುವ | ಭಾಷೆಯರಿಯೆ || ೧ || ಹುಲುಕರಿಯೆ ನಗುತೆಂದರಸುರರು | ಬಲುಹು ತೋರಿಸಬೇಡ ಖಂಡಿತ | ಎಲುಬು ಸಿಕ್ಕದೆ ಕೊನೆಯು ಬರಿದೆ | ಹಲುಬಬೇಡ || ೧ || ದೊರೆಯ

ದಾರಿಯನೀಕ್ಷಿಸುತ್ತಲಿ । ಇರವ ಬಯಸುತಲಿರುವ ಪ್ರಜೆಗಳ । ಭರದಿ ಕಾಣುತ ಬರಲು ವಸುಧೆಗೆ । ಹೊರಟಿವೀಗ ॥ ೩ ॥

॥ ಕಂದ ॥

ಮುನ್ನಾ ನೀ ಓಡಿನ್ನುತ । ಸನ್ಮ್ರದದಿಂ ಸಕಲ ವೈಭವದಿಳೆಗಿಳಿದಾಗಲ್ ॥ ಸನ್ನಿಧ ಬರುತಿಹ ಹರಿಯಂ । ಕಾಣುತ ರೋಷದೊಳ್ ಹುಂಕರಿಸುತಿಂತೆಂದರ್ ॥ ೧ ॥

॥ ರಾಗ: ಭೈರವಿ. ಅಷ್ಟತಾಳ ॥

ಮೂಢ ಇಲ್ಲಿಗೆ ಬಂದೆಯು । ಗೂಡಿನ ಹುಲ್ಲೆ । ನೋಡು ಸುಮ್ಮನೆ ಹೋಗೆಯು ॥ ಹೇಡಿಯೆ ನಿನ್ನಯು ಸುಂದರ ರತಿಯೊಡ । ಗೂಡುತ ಧುರವೆ ಸಗು ॥ ೧ ॥ ಬಲ್ಲೆ ನಿಮ್ಮಯು ಮಾತಿನ । ಹೊಲಬು ನಿಜ । ಪೊಳ್ಳು ಕಂತೆಯು ಕೇಳಿನಾ ॥ ಸೋಲು ನಿಶ್ಚಿತವೆಂದಾಡುವ ರೀತಿಯೆ । ಕೊಳ್ಳು ದಾನವರೇಸು ॥ ೨ ॥ ಪಾಪವೆನ್ನುತ ನಾವು । ಬಿಟ್ಟರೆ ನಿನ್ನ । ರಾಪಿನ ಗಡಿ ಸಂದವು ॥ ಕೂಪಮಂಡೂಕನೆ ಕಂಡರೆ ಕನಿಕರ । ಬಪ್ಪುದು ನೀಪೋಗು ॥ ೩ ॥ ನೀವು ನನ್ನಯು ಕಂಡು । ಅಲ್ಲಿಂದಿಲ್ಲಿ । ಸಾವು ಖಂಡಿತವೆಂದು ॥ ಕಾವರಿಲ್ಲವೆಂದು ಚೀರಿರೋಡಿ ಬಂದ । ನೋವು ತಿಳಿದೆವಹಹಾ ॥ ೪ ॥ ಪೆದ್ದುರಕ್ತವ ತೋರುತ । ಹೀರುತ ನಿನ್ನ । ಸದ್ದಡಗಿಸುವೆವೆನ್ನುತ ॥ ಎದ್ದು ಭೀಕರ ತೋರಿ ಮೋರುವೆತ್ತ ಕೇರಿ । ಬಿದ್ದರಾ ಹರಿಯು ಮೇಲೆ ॥ ೫ ॥

॥ ಕಂದ ॥

ಕೂಡಲೇ ಹರಿ ಸಿಡಿದೇಳುತ । ಗುಡುಗುವ ಮಧು ಕೈಟಭರೊಡ ಬಿಡದಿರಿ ಹಾಯಲ್ ॥ ಕೂಡಿತು ಮುಂಬರಿ ದಿಬ್ಬಣ । ಕಿಡಿಕಾರುತ ಧರೆ ನಡುಗಿ ಬಿರುಗುಡು ತೆರದೊಳ್ ॥ ೧ ॥

॥ ರಾಗ: ಸಾವೇರಿ. ಮಟ್ಟೆ ತಾಳ ॥

ಕ್ರೂರ ಕಾಳಿಯಂತೆ ಯೋಧವ । ರ್ಮ್ರಡುತಿಹರು । ಭಾರಿರೋಷ ತಳೆದು ಯುದ್ಧವ ॥ ಪ ॥ ಸುಳಿದು ಬೀಳೆ ಗಾಳಿಯಂತೆ । ಸುಳಿದು ಕೋಡಂಗಿಯಂತೆ । ಹಳಿದು ಸಿಂಹರಾಜನಂತೆ । ಮುಳಿದು ಹೋರಾಡಿ ಇಂತೆ ॥ ೧ ॥ ಏನ ಹೇಳಲವರ ಸಾಹಸ । ಮೇಲೆ ಗಗನ । ತಾನೆ ಗುಡುಗಿತೇನೊ ಬೆಕ್ಕಸ ॥ ಎರಗಿ ಮೇಲೆ ಡೇಗೆಯಂತೆ । ಹಾರಿತರುಬಿ ಹೋರಿಯಂತೆ । ಶರವ ಮಳೆ ಬೀಳುವಂತೆ । ಸುರಿಯೆ ಪ್ರಳಯುವಾಗುವಂತೆ ॥ ೨ ॥

॥ ಭಾಮಿನಿ ॥

ಸೂರೆಯಾಗಿಹವೆಲ್ಲ ಭೂತಳ । ಗಾರುಗೊಂಡವು ಜೀವತಲೆಗಳು । ಆರರೆ ಸಾಸಿರ ಪಂಚಬರಿಸಗಳನಕ ಧುರವೊಳಗೆ ॥ ಯಾರಿಗಂತವು ಗೆಲವು ಕಾಣದೆ । ಬೀರರರಿಗಳು ಸೋಲಲಾರರು । ಹರಿಯು ಯೋಚಿಸಿ ಚಿಂತೆಯೊಳಗಡರಿದನು ತಿಳಿಯದೆಯೆ ॥ ೧ ॥

॥ ರಾಗ: ಕಾಂಬೋಧಿ. ಝಂಪೆ ತಾಳ ॥

ಇಂದು ನೋಡಲು ಬಹಳ । ಸಂದುಹೋದವು ವರುಷ । ಯುದ್ಧದಲಿ ಗೆಲುವಿಲ್ಲ । ಬಂದಂತೆ ಸೋಲು ॥ ಮುಂದರಿಯೆ ಗತಿ ಕಾಣೆ । ಮುಂದರಿಯೆ ಪಥ ಕಾಣೆ । ಹಿಂದಿನ ಸ್ಥಿತಿ ನೋಡಿ । ಮುಂದೆ ತಿಳಿದಂತೆ ॥ ೧ ॥ ಮಿತಿ ಮೀರಿ ಕೊಬ್ಬಿರುವ । ಗತಕ ರಕ್ಕಸರನ್ನು । ಗತಿ ಕಾಣಿಸದೆ ಬಿಡೆ । ಗತ್ತು ಮೀರಿದರೆ ॥ ಗತಿಯಿಲ್ಲದವರನ್ನು । ಪತಿಕರಿಸುದ್ಧರಿಸುವ । ಪತಿತಪಾವನ ನಾಮ । ಹತನವಾದಂತೆ ॥ ೨ ॥

॥ ಕಂದ ॥

ಮಾಧವ ಕರಗುತ ತನ್ನೊಳು । ಮಾಡುವದೇನಿದಕುಪಾಯವೆನುತಿರಲಾಗಲ್ ॥ ಮಧು ಕೈಟರು ಹರಿಯೆನುತಂ । ಮುದದಿಂ ಮತ್ತರಾಗಿ ಬಳಿ ಕರೆಯುತ ಸಾರ್ದರ್ ॥ ೧ ॥

॥ ರಾಗ: ಭೈರವಿ. ಏಕತಾಳ ॥

ಕಲಿಯುಗ ಬಂದರು ಧುರವು । ಕೊನೆ । ಗೊಳಿದೆಯೆ ನಡೆವವು ನಿಜವು ॥ ಭಲೆ ಬಲಶಾಲಿಯು ಅಹುದು । ನೀ । ಕೇಳಿದ ನೀವೆವುಪಲಿದು ॥ ೧ ॥

॥ ರಾಗ: ಕೇದಾರಗೌಳ, ಅಷ್ಟ ತಾಳ ॥

ಮಧು ಕೈಟಭರಂಥ । ಮೃದು ಶೂರತ್ವಗಳ್ । ಮುಡುಹಧೀರರ ಕಾಣೆ ॥ ಮಧುವಿಂಗೊಡಗೂ । ಡಿದೆ ಔದಾರ್ಯವು । ಕೊಡುವಿರೆ ಕೇಳುದನು ॥ ೧ ॥

॥ ರಾಗ: ಭೈರವಿ. ಏಕತಾಳ ॥

ಆಡಿದ ಮಾತಿಗೆ ಎರಡು । ಬಗೆ । ದಾಡುವೆವೆಂದುದು ಬರಡು ॥ ಬೇಡಿಕೊ ನಿನ್ನಯ ಇಂಗಿತ । ನಾವ್ । ಕುಡುಗ್ಗೈ ದೊರೆಗಳು ಖಂಡಿತ ॥ ೧ ॥

॥ ರಾಗಃ ಮಾರವಿ. ಏಕತಾಳ ॥

ಇನಿತೂ ನನಗನು | ಮಾನವಿಲ್ಲ ನೀವ್ | ದಾನಿಗಳೆಂಬುದಕೆ ॥ ಮಾಣದೆ ನಿಮ್ಮಯ | ಪ್ರಾಣವನೀದರೆ | ದಾನವಾಯಿತ್ತು ಪದಕೆ ॥ ೧ ॥

॥ ರಾಗಃ ಭೈರವಿ. ಏಕತಾಳ ॥

ಜೀವವ ಬೇಡುವನೆಂದು | ನಾವ್ | ಭಾವಿಸಲಾರದೆ ಇಂದು | ಭಾವಿಕರಾಗಿಯೆ ಮಾತ | ತಂ | ತ್ರಿವನಿಗೆ ಕೊಟ್ಟಾಯಿತು ಘಾತ ॥ ೧ ॥ ಮೀರಿದ ಭಾಷೆಯ ದೋಷ | ದೋ | ಳಿರವಾಗೆವು ಶ್ರೀನಿವಾಸ ॥ ಮರೆಯದೆ ಹೆಸರನ್ನುಳಿಸಿ | ಪರಿ | ಪೂರೆ ಭೂಲಿಂಗವನಿರಿಸಿ ॥ ೨ ॥

॥ ವಾರ್ಧಿಕ ॥

ಹರಿಯ ಪಾದಕೆ ಎರಗಿ ಬೇಡಿ ಮಧು ಕೈಟಭರು | ಹರುಷದಿಂದ ಸುವ ನೀಗಲು ಸಿದ್ಧರಾಗಿರಲು | ಹರಿಯು ಚಕ್ರವ ಬಿಟ್ಟು ಸಂಹಾರವಂ ಮಾಡಿ ದಾನವರ ಮನಸಿನಂತೆ ॥ ಪುರಜಯಂತಿಯೆಂ ಪೆಸರ ತಳೆದಿಹುದು ಬನವಾಸಿ | ಧುರವೆಸಗಿದ ಸ್ಥಳದಿ ಮಧುಲಿಂಗವನ್ನೂರಿ | ಪರದಾರಿ ದೂರದೊಳು ಕೈಟಭನ ಮೂರುತಿಯನಿರಿಸಿ ಹರನನ್ನು ಕರೆಯೆ ॥ ೧ ॥

॥ ಕಂದ ॥

ಹರಸಂಪ್ರೀತಿಸಿ ತನ್ನಯ | ವರ ಕೈಲಾಸಗಿರಿ ತೊರೆದು ಧರೆಗಿಳಿದಾಗಲ್ ॥ ಸ್ಥಿರವಾಗಿಹಲಿಂಗದೊಳು | ಸೇರುತ ಸುಖದೊಳಿರಲಿತ್ತ ಪತಿ ಕಾಣದಿರಲ್ ॥ ೧ ॥

॥ ರಾಗಃ ಕಲ್ಯಾಣ. ಆದಿತಾಳ ॥

ವಿರಹತಾಪದಿಂದ ಬೆಂದಳು | ಪಾರ್ವತಿದೇವಿ | ಹರನ ತಾನುಕಾಣೆನೆಂದಳು ॥ ಪ ॥ ದಿನವು ಹತ್ತಿರಕ್ಕೆ ಬಂದು ತಾ | ಏನೆಲ್ಲ ಹೇಳಿ | ಜೇನಸುರಿವ ಮಾತನೊರೆಯುತ ॥ ವಿನಯದೊಳಗೆ ಎನ್ನ ಸೆಳೆಯುವ | ಪ್ರೇಮ ತೋರಿ | ಕುಣಿಸುತಿರುವ ಪತಿಯೆ ಇಲ್ಲವು ॥ ೧ ॥ ಕೈಲಾಸವೆಲ್ಲ ಸುತ್ತು [redacted] | ತಿರುಗಿ ತಿರುಗಿ | ಮಿಲನವಿಲ್ಲ ತೊಳಲಿ ಬಳಲುತ ॥ ಅಲೆದು ಮುಂದೆ ಮುಂದೆ ಸಾಗುತ | ತನ್ನೊಳಗೆ ತಾನು | ಸಲ್ಲ ನಿಲ್ಲನೆಲ್ಲ ಒರಲುತ ॥ ೨ ॥ ತಿರುಗಿಸುತ್ತಿ ಮತ್ತೆ ಬಂದಳು | ಹುಚ್ಚಳಂತೆ | ಅರಸಲೆಂದು ಕರೆದು ಓಡ್ದಳು ॥ ಮರದ ಬಳಿಗೆ ಹೋಗಿ ಸಾರ್ದಳು | ಮರವನ್ನೆ ತುಳಿದು | ಮರುಗಿ ಹಿಂದೆ ಎರಗಿ ಬಿದ್ದಳು ॥ ೩ ॥ ಧರೆಯ ನೋಡೆ ಮನಸು ಎನ್ನಲು | ನಗೆಯ

ಸೂಸಿ | ಒರೆದು ಆಗಲೆಂದು ಒಪ್ಪಿ ತಾ || ಹಿರಿದು ಹೇಳ ಎಲ್ಲಿ ಪೋದನು | ಕಣ್ಣು ತಪ್ಪಿ | ಮರೆಯು ಆಗಿ ಜಾರಿ ಪೋದನು || ೪ || ವಸುಧೆಗಿಳದು ಅಳಿದು ಬಳಿಯುತ | ಜಡೆನು ಒರಲಿ | ಮಿಸುಕಿ ತಾನೆ ತನ್ನ ಮರೆಯುತ || ಎಸೆವ ಕಣ್ಣ ಹೊರಳಿಸುತ್ತಿ ತಾ ಉಸಿರನ್ನೆ ಬಿಟ್ಟು | ಸೋಸಿ ಬಂದೆ ಬರುವೆನೆನ್ನುತ || ೫ || ಕಾಡಮಧ್ಯ ಹೋಗಿನಿಲ್ಲುತ | ಇಲ್ಲೆ ಎಲ್ಲೊ | ಅಡಗಿ ಇರುವನವನು ಖಂಡಿತ || ಹುಡುಕಿ ಧೈರ್ಯವನು ತಾಳುತ | ಮುಂದಡಿಯನ್ನಿಟ್ಟು | ನಡೆಯ ಸುಳಿವೆ ಇಲ್ಲವೆನ್ನುತ || ೬ || ಯಾರೊ ಓಹೊ ಕರೆವರಲ್ಲವೆ | ಭ್ರಾಂತಿಗೊಂಡು | ಅರಿತೆ ಆವನೆ ನಲ್ಲನಲ್ಲವೆ || ಬರುವೆ ನಿಲ್ಲು ಎಂದು ನಕ್ಕಳು | ಮರುಳಾಗಿ ಹೋಗಿ | ಗೌರಿ ಕಣ್ಣನೀರ ಸುರಿದಳು ||೭|| ಇಂದು ಮುಂದೆ ಸಾಗಬಲ್ಲೆನೆ | ಓಹೊ ತಿಳಿದೆ | ಚೆನ್ನನವನು ಇಲ್ಲೆ ನಿಲ್ಲನೆ | ಮೌನ ಕುಳಿತು ಯೋಗಿಯಂತೆಯೆ | ಮನದನ್ನನನ್ನು | ನೆನೆವೆ ಮನಸು ಚಲಿಸದಂತೆಯೆ || ೮ || ಇನಿಯನನ್ನು ಸೆರೆಯ ಹಿಡಿಯುವೆ | ಸಿಗಲು ಅವನು | ಕನಲಿ ಮಾತನಾಡಿ ನೋಡುವೆ || ಮುನಿದು ಧಿಟ್ಟಳಾಗಿ ನುಡಿದಳು | ಮರುಗಳಿಗೆಯಲ್ಲೆ | ಕೊನರು ಕರಗಿ ಧ್ಯಾನಗೈದಳು || ೯ ||

|| ವಾರ್ಧಿಕ ||

ಭೀಕರವ ಕಂಡಲೆವ ಮನವನ್ನು ಬಿಗಿಹಿಡಿದು | ವ್ಯಾಕುಲವ ತೊರೆದು ಪಂಚಾಕ್ಷರಿಯ ಮಂತ್ರವನು | ಸ್ವೀಕಾರಮಂಮಾಡಿ ಪರ್ಣಗಳ ಮಾಹಾರವಾಗಿ ಜಪಿಸುತ್ತಲಿರಲು || ಆಕ್ರಮಿಸಿದ ಪ್ರಭೆಯುವನವನ್ನೆಸುತ್ತಿರುಗಿ | ಸಂಕಾಶ ರವಿಯುಗ್ರ ಕಿರಣದಂತೆಸೆದೆಸೆಯೆ | ನೂಕಿದ ವಸಿಷ್ಠರನು ಉಮೆ ಕಂಡಳಾದರಿಸಿ ಪೂಜಿಸುತ ಬೆಸಗೊಂಡಳು || ೧ ||

|| ರಾಗ: ಸಾವೇರಿ. ಅದಿತಾಳ ||

ವರಮುನಿಗಳೆ ನಿಮ್ಮಯ | ದರುಶನದಿಂದ | ಪರಮಪಾವನಳಾದೆನಾ | ಚರಣ ಸ್ಪರ್ಶದಿಂದ | ಈವನವೆ ಪ | ವಿತ್ರವಾಯ್ತಾನಂದ || ೧ ||

|| ರಾಗ: ತೋಡಿ. ಅದಿತಾಳ ||

ಗಿರಿಯಬಿಟ್ಟು ಏತಕಾಗಿ | ಬರಿದೆ ಕುಳಿತೆ ಕಾಡಿನಲ್ಲಿ | ಗಿರಿಜೆ ನೀಸು ತಪವಗೈವ | ವರದಿ ತಿಳಿಯೆ ಬಂದೆನಿಲ್ಲಿ || ೧ ||

॥ ರಾಗ: ತೋಡಿ. ಆದಿತಾಳ ॥

ಕಾರಣ ಮಾತ್ರವುದಲ್ಲ । ಕರುಣವಿಟ್ಟು ಕೇಳಿರೆಲ್ಲ । ಹರನ ಕಾಣದಿರಲು ಬಳಲಿ । ವಿರಹತಾಪದಿಂದ ಬಳಲಿ ॥ ೧ ॥ ಗಿರಿಯನೆಲ್ಲ ಅಲೆದು ಒಲಿದು । ತಿರುಗಿ ಸಾಕಾಯ್ತು ಕೊನೆಗೆ ॥ ಇರುವ ತಿಳಿಯಲಾರದೆಲ್ಲಿ । ಹರನ ನೆನೆಯುತಿರುವೆನಿಲ್ಲಿ ॥ ೨ ॥ ಬಹಳ ದಿನವು ಉರುಳಿ ಹೋಯ್ತು । ಸಹಜ ದಿನವು ಮರಳಿ ಬಂತು । ಮಹಾಶಯನ ಸಂದರ್ಶನವು । ಬಹಳ ಕಠಿಣ ತಿಳಿಸಿ ತಾವು ॥ ೩ ॥

॥ ರಾಗ: ತೋಡಿ. ಆದಿತಾಳ ॥

ವರನು ನಿನ್ನ ಪರಮ ಭಕ್ತ । ಪರಾಧೀನನಿಹನು ಸತ್ತ ॥ ಹರನ ಒಲಿಸೆ ದಾರಿ ಸುಲಭ । ತೋರುವೆನು ನಿರಾಶೆ ತೊಲಗು ॥ ೧ ॥ ಗಂಗ ಯಮುನ ನದಿಗಳುಗವು । ಸಂಗಮಸ್ನಾನಗಳ ತೆರದಿ ॥ ಮಂಗಳಪ್ರದ ಮಾದತೀರ್ಥ । ಕಂಗಳಳತೆಯೊಳಗೆ ಸೃಜಿಪೆ ॥ ೨ ॥ ನಿರ್ಮಲೋದಕ ಸ್ನಾನಗೈದು । ನಿರ್ಮಲೋದಕವನ್ನೆ ಕುಡಿದು ॥ ನಿರ್ಮಲಮನಸಿಂದ ಪರಾ । ತ್ಪರನ ನೆನಸು ಓಡಿ ಬರುವ ॥ ೩ ॥

॥ ರಾಗ: ತೋಡಿ. ಆದಿತಾಳ ॥

ಮಾನ್ಯರು ಸಾಮಾನ್ಯರಲ್ಲ । ಧನ್ಯಳಾದೆ ತಮ್ಮ ನುಡಿಯ । ಮಾನ್ಯ ಮಾಡಿದಂತೆ ನಡೆವೆ । ವಿನೀತಳಾಗಿ ಕರವ ಮುಗಿವೆ ॥ ೧ ॥

॥ ಭಾಮಿನಿ ॥

ಇಷ್ಟದಂತೆಯೆ ತೀರ್ಥವೊಂದುವ । ಸಿಷ್ಟರಾಗಲೆ ರಚಿಸಿಪೋಗಲು । ಶಿಷ್ಟರಾನುಡಿಯಂತೆ ಗೌರಿಯು ಹರನುವಾಸಿಸಲು ॥ ಸೂಸಿನಗುವನು ಉಮೆಯುತಪವನು । ಸೋಸಿ ಹರದೂರದಲಿ ಅಡಗೀ । ವೇಷ ಈಕೆಯ ನೋಡಿಯೆಂದುಪಹಾಸ್ಯವನು ಗೈಯೆ ॥ ೧ ॥

॥ ರಾಗ: ತೋಡಿ. ಏಕತಾಳ ॥

ಬಾಡಿವೆ ಇವಳ ಮುಕುರ ಕಣ್ಣುಗಳು । ಗೂಢದೋಳಿನಿಯನ ನೆನೆಯುತಿರುವಳು ॥ ಪ ॥ ಚೆನ್ನೆ ಚಲುವೆ ಇವಳು । ಕನ್ನೆ ಸಂಪನ್ನೆ ಮರಳು । ಚೆನ್ನ ಸುಖವ ತೊರೆದು । ಚೆನ್ನಿಗ ಬಾರೆನ್ನುವಳು ॥ ೧ ॥ ಹಗಲಿರುಳಿನ ಪರಿವೆ । ಜಗವೆ ಈಕೆಗೆ ಮರವೆ । ಮಿಗುವ ಮಾತಲ್ಲವಿದು । ನಗೆಯು ಬಾರದೆ ಇರದು ॥ ೨ ॥ ಇಂದು ಬಿಡದೆ ಕೊರಗು । ಅಂದು ಮಿಂಚಿನ

ಸೆರಗು । ಚೆಂದ ನೋಡುವದೇನು । ಮಂದಗಮನೆ ಇವಳ ॥ ೩ ॥ ಅರೆ ಕಣ್ಣ ತೆರೆಯುತ । ತೆರೆದುಬಾಯ್ಮಡಿಯುತ । ಬೆರಳನ್ನೆ ಎಣಿಸುತ । ಇರುವ ಈ ಪರಿನೋಡಿ ॥ ೪ ॥ ವಿರಹ ತಾಪದಿ ಬೆಂದು । ಹರನೆ ಬಾ ರಕ್ಷಿಸೆಂದು । ಕರೆದು ನೋಡುವಳೊಮ್ಮೆ । ಹೊರಳಿ ಕೊರಳನೆತ್ತಿ ॥ ೫ ॥

॥ ಭಾಮಿನಿ ॥

ಪರಿಕಿಸುವೆ ನಾನಿವಳನೆನ್ನುತ । ಪರಿಪರಿಯ ವಿಧದಿಂದ ಸನ್ನುತ । ಹರನು ವಟುವೇಷವನು ರೂಪಿಸಿ ನಿಮಿಷಮಾತ್ರದಲಿ ॥ ಬರಿದು ಹರನನು ನೆನೆಯುತಿರುತಿಹ । ತರುಣಿ ಹತ್ತಿರ ಬಂದು ನಿಂದನು । ಗಿರಿಜೆ ತೇಜೋರೂಪಿಯಾಗಂತುಕನ ಸತ್ಕರಿಸಿ ॥ ೧ ॥

॥ ರಾಗ: ತೋಡಿ. ಆದಿತಾಳ ॥

ಬ್ರಾಹ್ಮಣಶ್ರೇಷ್ಟರೆ ನಮನ । ಮುಹೂರ್ತಮಾಡಿರಿಲ್ಲಾಸನ ॥ ಮುಹಾಗಮನವೇನು ಕಾರಣ । ಮಹಾತ್ಮರು ತಿಳಿಯೆ ನಾನು ॥ ೧ ॥

॥ ರಾಗ: ಕಾಪಿ. ಅಷ್ಟತಾಳ ॥

ದೇವಿ ನಿನ್ನಯ ತಪಸಿನ । ಪ್ರ । ಭಾವವ ಕೇಳಿ ಬಂದೆನು ಬಳಿಗೆನಾ ॥ ಶಿವನ ಕುರಿತು ತಪವೇಕೆ । ನೀ । ಬವಳಿ ಸುಮ್ಮನೆ ಕಾಲಕಳೆಯುವದೇಕೆ ॥ ೧ ॥

॥ ರಾಗ ತೋಡಿ. ಆದಿತಾಳ ॥

ಸುರರಿಗೆಲ್ಲ ಒಡೆಯನಾಗಿ । ಮೆರೆವ ವೃಷಭಾರೂಢನಾಗಿ ॥ ಮೇರು ಗಿರಿಯ ನೀಲಕಂಠನ । ವರಿಸಿ ಕೂಡಬೇಕೆಂಬ ಮನ ॥ ೧ ॥

॥ ರಾಗ: ಕಾಪಿ. ಅಷ್ಟತಾಳ ॥

ರೂಪಸುಂದರಿ ದೇವಿ ನೀನು । ವಿರೂಪನಾಗಿಹ ಹರನ ನೆನೆಯೆ ಮರುಳೇನು ॥ ಪ ॥ ಅಹಗಜ ಚರ್ಮಧಾರಿಯು । ಮೇಣ್ । ಸಹ ರುಂಡಮಾಲಿಗಳನ್ನೆ ಧರಿಸಿಹನು ॥ ವಹ್ನಿ ಕಣ್ಣುಳ್ಳ ಮುಕ್ಕಣ್ಣ । ವಿ । ರಹಿತ ದಿಗಂಬರನಿಹನು ಶಂಕರನು ॥ ೧ ॥ ವಾಸವಮಾಡಿಕೊಂಡಿರಲು । ಪರಿ । ಹಾಸವಲ್ಲ ಶಿವಮನೆಯಿಲ್ಲದವನು ॥ ಸೂಸಲು ಬೂದಿಯ ಬಡುಕ । ನಿಜ । ಕಾಸಿಲ್ಲದೆ ಬೇಡುವ ಭಿಕ್ಷೆ ತಿರುಕ ॥ ೨ ॥ ಮಸಣವಾಸವೆ ಬಹು ಸುಖವು । ಎಂಬ । ವ್ಯಸನವಿಲ್ಲದೆ ಭೂತಗಳ ಸಂಗಡಿಹುವ ॥ ವಾಸವಾಗಿರಲಲ್ಲಿ ಭಯವು । ಸಹ । ವಾಸಬೇಡ ನಿನಗಾರು ಹೇಳಿದರು ॥ ೩ ॥

॥ ರಾಗ: ಮಾರವಿ. ಏಕತಾಳ ॥

ಏನು ಹೇಳುವಿರಿ । ಮೌನ ತೆಗಳಿ ಮುಖ । ಕಾಣಲಾರೆ ಹರನು ॥ ಮಾನವಂತ ಅನು । ಮಾನವಿಲ್ಲ ಮನ । ಲೀನವಾಗಿ ಇಹುದು ॥ ೧ ॥ ಗರ್ವದಿಂದ ನೀವ್ । ಹರನ ತೆಗಳಿದಕೆ । ಘೋರ ನರಕ ಬಹುದು ॥ ನಿರ್ವಿಕಲ್ಪ ಶಿವ । ಸರ್ವಶಕ್ತ ಭವ । ಸರ್ವಮಾನ್ಯನಿಹನು ॥ ೨ ॥

॥ ಭಾಮಿನಿ ॥

ಬಿರುಸು ಮಾತನು ಕೇಳಿ ತನ್ನೊಳು । ಗಿರಿಜೆ ಸಾರಿದನವನು ನೆಚ್ಚುತೆ । ನಿರಸ ಔದಾಸೀನ್ಯ ಬಹಿರಂಗದಲಿ ವಟು ತೋರಿ ॥ ತೆರಳಿದನು ಮರೆಯಾಗಿ ತನ್ನೊಳು । ಹರುಷತಾಳುತ ನಗೆಯ ಸೂಸುತ । ಪರಶಿವನು ಬಂದುಸುರಿದನು ನಿಜರೂಪವನು ತೋರಿ ॥ ೧ ॥

॥ ರಾಗ: ಭೈರವಿ. ಝಂಪೆ ತಾಳ ॥

ಗಿರಿಜೆ ಇದೊ ಬಂದಿರುವೆ । ಬಿರಿಸು ಮನ ತಂದಿರುವೆ । ತೆರೆ ಕಣ್ಣ ಮುಂದಿರುವೆ । ಬರಿದೆ ನಿಂದಿರುವೆ ॥ ೧ ॥ ವಟುವೇಷದಿಂ ಬಂದು । ದಿಟ ಮನಸ ಕಂಡವನು । ಪಟು ನಿನ್ನ ಹರನವನು । ದ್ದಟನಲ್ಲ ನೋಡು ॥ ೨ ॥ ತೊರೆದುಬಿಡು ಭಯವನ್ನು । ಹರಿದುಬಿಡು ಪ್ರೇಮದಾ ! ತೊರೆಯನ್ನು ನೀನಿನ್ನು । ಹರುಷವನು ತೋರಿ ॥ ೩ ॥ ಇನಿದಾಗಿ ನಲ್ನುಡಿದು । ಇನಿಯಳನು ಕರೆಯುತಿಹ । ಮನದಿನಿಯನನು ಉಮೆಯು । ಮನದಣಿಯೆ ನೋಡಿ ॥ ೪ ॥ ಮಣೆಯಿಟ್ಟು ಕುಳ್ಳಿರಿಸಿ । ಮನ್ನಣೆಯೊಳ್ ಸಿಂಗರಿಸಿ । ಹನಿಸಿ ನೀರನು ತೊಳೆದು । ಮಣಿದು ಪಾದವನು ॥ ೫ ॥ ಹನಿವ ಕಂಬನಿ ಸುರಿಸಿ । ಕನವರಿಸಿದಳು ಗಾಸಿ । ಮುನಿಸು ತೊರೆದೀ ದಾಸಿ । ಯನ್ನು ಸ್ವೀಕರಿಸೈ ॥ ೬ ॥

॥ ರಾಗ: ಮಾರವ. ಏಕತಾಳ ॥

ಜಯದ ಈ ಪುರದಿ । ಜಯವು ಅಡಗಿಹುದು । ಮಾಯವಿಲ್ಲದವರು ॥ ನಯದಿ ಯಾರು ತ । ನ್ಮಯದಿ ನೆನೆಯೆ ಸಾ । ಯುಜ್ಯ ಪಡೆವರವರು ॥ ೧ ॥ ವಸುಧೆಯೊ ನವ ಕೈ । ಲಾಸ ನೋಡು ನೀ । ಹಾಸ್ಯವಲ್ಲ ನಳಿನಿ ॥ ವಸುನಗೆಯ ಬೀರಿ । ಹುಸಿಮುನಿಸ ತೋರಿ । ನಾವ್ । ವಾಸಿಸೋಣ ರಮಣಿ ॥ ೨ ॥

॥ ವಾರ್ಧಿಕ ॥

ಹರನು ತನ್ನಯ ಕೋಮಲಾಂಗಿ ಗಿರಿಜೆಯ ಅಳಲ । ಕರಪಿಡಿದು ಕುಳ್ಳಿರಿಸಿ ಉಪಶಮನವಂ ಮಾಡಿ । ಭರದಿಂದ ಮನಮೆಚ್ಚಿ ವಸುಮತಿಯ ವರ್ಣನೆಯ ಮಾಡವಳ ವರದಿಯಂತೆ ॥ ಪುರಜಯಂತಿಗೆ ಪೊರಟು ನೆಲಸಿ ತನ್ನಯ ಭಕ್ತ । ವರರಿಂದೆ ಸಂಭ್ರಮದ ಪೂಜೆಯಂಗೊಳ್ಳುತ್ತ । ಮೆರೆಯುತ್ತಲಿರುತಿರ್ಪ ವೈಭವವಿಲಾಸಗಳನೇನೆಂದು ಪೊಗಳಲಿನ್ನು ॥ ೧ ॥

॥ ಭಾಮಿನಿ ॥

ಗೊತ್ತುಗುರಿಯಿಲ್ಲದಿಹ ಈತನು । ಉತ್ತಮನವನು ವ್ಯರ್ಥಪೋಗುವ । ಹೊತ್ತಿನಲಿ ಹೊಸ ಹೆಜ್ಜೆಯಿರಿಸಿದೆ ಯಕ್ಷಗಾನದಲಿ ॥ ಚಿತ್ತದಲಿ ಒಳಿತಿಟ್ಟು ನೋಡುವ । ಉತ್ತಮರಿಗರ್ಪಿಸಿದೆ ಮುದದಿಂ । ಕ್ಷೇತ್ರ ಪಾಲನ ದಯದಿ ಮಾನಾ ಬರೆದ ಈ ಕೃತಿಯ ॥ ೧ ॥

॥ ರಾಗ: ಧವಳಾರ. ಆದಿತಾಳ ॥

ಮಂಗಲ ಮಂಗಲ ಪರಶಿವಗೆ । ಜಯ ಮಂಗಲ ಗಿರಿಜಾ ಶಂಕರಗೆ ॥ ಮಂಗಲಂ ॥ ಪ ॥ ಶಿರದೊಳು ಗಂಗೆಯಪೊತ್ತವಗೆ । ಪರಮ ಪವಿತ್ರ ದಿಗಂಬರಗೆ । ವರ ಕೈಲಾಸದಿ ಮೆರೆಯುವ ಹರನಿಗೆ । ಸುರವರ ಪೂಜಿತ ಮೂರುತಿಗೆ ॥ ಮಂಗಲಂ ॥ ೧ ॥ ಮಾಧವಪ್ರಿಯ ಮಧುಕೇಶನಿಗೆ । ಮೇದಿನಿಗಿಳಿದ ಕೈಟೇಶನಿಗೆ । ಗೂಢವಿ ಪಂಚಾಕ್ಷರದೊಳು ನಲಿವಗೆ । ಕುಂದಣಕ್ಷೇತ್ರಪಾಲನಿಗೆ ॥ ಮಂಗಲಂ ॥ ೨ ॥

ಮುಗಿಪುದು ಪದಶತನೊಂದಾರೊಂಬತ್ತಕ್ಕಂ

ನಮಸ್ತೆ



---

ವಿ ಸೂ: 'ಬಂದಾಣೆ ಮಾಲೆ' ಪುಸ್ತಕಗಳನ್ನು ಕೊಂಡುಕೊಂಡ ಕೂಡಲೇ ಸರಿಗೆ ತೆಗೆದುಹಾಕಿ, ದಾರದಿಂದ ಹೊಲಿದು ಇಟ್ಟುಕೊಳ್ಳಿರಿ.

ನೀವು ಕೇಳಬಹುದು—

"ನನ್ನ ವಹಿವಾಟು ಬಹಳ ಚಿಕ್ಕದು–ಅದು ಕೇವಲ ರೂಪಾಯಿ ಆಣೆಗಳಿಂದ ಮಾತ್ರವೇ ಕೂಡಿದೆಯಲ್ಲದೆ, ದೊಡ್ಡ ಮೊತ್ತದ್ದಲ್ಲ ಹೀಗಿರುವಾಗ, 'ಕೊರ್ಪರೇಶನ್' ಬೇಂಕು ನನ್ನ ಚಿಲ್ಲರೆ ಹಣ ಖಾತೆಯನ್ನು ಲೆಕ್ಕಿಸುವುದೇ?"

ಅದಕ್ಕೆ ನಮ್ಮ ಉತ್ತರವೇನು ಬಲ್ಲಿರಾ?

"ನಿಮ್ಮ ಹಣ ಖಾತೆಯ ಪ್ರಾಮುಖ್ಯತೆಯು ಅದರ ಗಾತ್ರದ ಮೇಲಿಲ್ಲ. ನೀವು ದೂರದೃಷ್ಟಿಯನ್ನಿಟ್ಟು, ರಚನಾತ್ಮಕ ದಾರಿಯನ್ನವಲಂಬಿಸಲಿಚ್ಛಿಸುವಿರಾದರೆ........

"ಸ್ನೇಹ-ಸೌಹಾರ್ದ ಹಾಗೂ ಸಹಾಯ-ಸಹಕಾರಗಳಿಂದ ಕೂಡಿದ ನಮ್ಮ ಸದುದ್ದೇಶ-ಧ್ಯೇಯ-ಧೋರಣೆಗಳನ್ನು ಮೆಚ್ಚುವಿರಾದರೆ........

"ನಿಜಕ್ಕೂ, ನಾವೇಕೆ ನಿಮ್ಮ ಹಣ ಖಾತೆಯನ್ನು ಸ್ವಾಗತಿಸಕೂಡದು? ಅದಕ್ಕೆ ನಮ್ಮ ಬರಿಯ ಸ್ವಾಗತ ಮಾತ್ರವೇ ಅಲ್ಲದೆ, ಅದು ವೃದ್ಧಿಗೊಳ್ಳಲು ಅಹೋರಾತ್ರಿ ನಿಮ್ಮೊಡನೆ ನಾವೂ ದುಡಿಯುವೆವೆಂಬ ಆಶ್ವಾಸನೆಯನ್ನೀಯುವೆವು!

"'ಕೋರ್ಪರೇಶನ್' ಬೇಂಕಿನಲ್ಲಿ—ಸರ್ವರಿಗೂ ಪ್ರೀತಿ-ಪುರಸ್ಕಾರ ಪೂರ್ವಕ ಸಹಾಯವನ್ನಿತ್ತು, ಅವರ ವಹಿವಾಟುಗಳನ್ನು ವೃದ್ಧಿಗೊಳಿಸುವುದರಲ್ಲಿಯೇ ನಾವು ಯಾವಾಗಲೂ ಸಂತೋಷಪಡುವೆವು!!"

## ದಿ ಕೆನರಾ ಬೇಂಕಿಂಗ್ ಕೊರ್ಪೊರೇಶನ್ ಲಿಮಿಟೆಡ್

ಅಖಿಲ ಕರ್ನಾಟಕದ ಶೆಡ್ಯೂಲ್ಡ್ ಬೇಂಕುಗಳಲ್ಲೆಲ್ಲಾ ಇದು ಅತಿ ಹಳೆಯದು.

ಒಟ್ಟು ವ್ಯವಹಾರ ಮೊಬಲಗು ರೂಪಾಯಿ 7,00,00,000ಗೂ ಮಿಕ್ಕಿದೆ.

ಸ್ಥಾಪನೆ: 1906.] [ಪ್ರಧಾನ ಕಾರ್ಯಾಲಯ: ಉಡುಪಿ ದ.ಭಾರತ.

Edited, Printed & Published by K. V. Shenoy
at The Prabhat Printers, Ltd., Mangalore.